# ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

# ವಾರ್ಷಿಕ ವರದಿ ೧೯೮೯-೯೦

ಅಕಾದೆಮಿಯು ೧೯೮೯-೯೦ನೆಯ ಸಾಲಿನಲ್ಲಿ ೧೯೯೦ನೆಯ ಮಾರ್ಚ್ ೩೧ರ ವರೆಗೆ ನಡೆಸಿದ ಕಾರ್ಯಕ್ರಮಗಳ ವರದಿ ಇಂತಿದೆ :

**ಉಪನ್ಯಾಸ ಕಾರ್ಯಕ್ರಮಗಳು :** ೧. ದಿನಾಂಕ: ೨೭-೪-೮೯ನೆಯ ಗುರುವಾರ ಹಾಗೂ ೨೮-೪-೮೯ನೆಯ ಶುಕ್ರವಾರ ಸಂಜೆ ೬ ಗಂಟೆಗೆ ಪ್ರೊ|| ಜಿ.ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ಡಾ|| ಸೂರ್ಯನಾಥ ಕಾಮತ್ ಅವರಿಂದ 'ಭಾರತೀಯ ಸಂಸ್ಕೃತಿ ರಕ್ಷಣೆಗೆ ವಿಜಯನಗರದ ಕೊಡುಗೆ' ಎಂಬ ವಿಷಯವಾಗಿ ಉಪನ್ಯಾಸ ಕಾರ್ಯಕ್ರಮವು ನಡೆಯಿತು.

೨. ಬಸವ ಸಮಿತಿ, ಬೆಂಗಳೂರು ಅವರ ಸಹಕಾರದೊಂದಿಗೆ ಡಾ|| ಸಿದ್ಧಯ್ಯ ಪುರಾಣಿಕ ಅವರ ಅಧ್ಯಕ್ಷತೆಯಲ್ಲಿ, ಪ್ರೊ|| ಜಿ.ಎಸ್. ದೀಕ್ಷಿತ್ ಅವರು 'ಶಿವಾಜಿ-ಮಲ್ಲಮ್ಮ ಸಮರೋತ್ಸವ : ಒಂದು ಅಪೂರ್ವ ಹಸ್ತಪ್ರತಿ' ಎಂಬ ವಿಷಯ ಕುರಿತಾಗಿ ೨೨-೯-೧೯೮೯ನೆಯ ಶುಕ್ರವಾರ ಸಂಜೆ ೬ ಗಂಟೆಗೆ ಉಪನ್ಯಾಸ ನೀಡಿದರು.

೩. ಮಿಥಿಕ್ ಸೊಸೈಟಿಯ ಸಹಕಾರದೊಂದಿಗೆ ೨೦-೧೦-೮೯ನೆಯ ಸಂಜೆ ೬ ಗಂಟೆಗೆ ಡಾ|| ಎಂ. ಚಿದಾನಂದಮೂರ್ತಿ ಅವರು 'ಪಂಚಾಚಾರ್ಯರ ಬಗೆಗಿನ ವಿವಾದಕ್ಕೆ ಅಂತಿಮ ತೆರೆ' ವಿಷಯ ಕುರಿತು ಉಪನ್ಯಾಸ ನೀಡಿದರು. ಡಾ|| ಸಿದ್ಧಯ್ಯ ಪುರಾಣಿಕ ಅವರು ಅಧ್ಯಕ್ಷತೆ ವಹಿಸಿದ್ದರು.

೪. ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸಹಕಾರದೊಡನೆ ದಿನಾಂಕ ೨೬-೧೦-೧೯೮೯ನೇ ಗುರುವಾರ ಸಂಜೆ ೬ ಗಂಟೆಗೆ ಜನಪದ ರಸಮಂಜರಿ ಮತ್ತು ಸಾಹಿತ್ಯ ಇತಿಹಾಸ ದರ್ಶನ ಉಪನ್ಯಾಸ ಕಾರ್ಯಕ್ರಮ ನಡೆಯಿತು. ಡಾ|| ಸೂರ್ಯನಾಥ ಕಾಮತ್ ಅವರು 'ಕರ್ನಾಟಕ ಸಾಂಸ್ಕೃತಿಕ ಪರಂಪರೆ' ಕುರಿತು ಉಪನ್ಯಾಸ ನೀಡಿದರು. ಪ್ರೊ|| ಎಂ.ಎಚ್. ಕೃಷ್ಣಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು.

೫. ಮಿಥಿಕ್ ಸೊಸೈಟಿಯಲ್ಲಿ ದಿನಾಂಕ ೨೧-೧೧-೮೯ನೆಯ ಮಂಗಳವಾರ ಸಂಜೆ ೬ ಗಂಟೆಗೆ ಡಾ|| ಕೆ. ಮುದ್ದಣ್ಣ ಮಂಜಾರ್ ಅವರು 'ಪರ್ಶಿಯನ್ ಮತ್ತು ಉರ್ದು ಸಾಹಿತ್ಯದಲ್ಲಿ ಕರ್ನಾಟಕ' ವಿಷಯ ಕುರಿತು ಉಪನ್ಯಾಸ ನೀಡಿದರು. ಎಂ. ಫಜಲುಲ್ ಹಸನ್ ಅವರು ಅಧ್ಯಕ್ಷತೆ ವಹಿಸಿದ್ದರು.

**ತೃತೀಯ ವಾರ್ಷಿಕ ಸಮ್ಮೇಳನ :** ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಸಹಕಾರದೊಡನೆ ೧೦-೬-೧೯೮೯ ಹಾಗೂ ೧೧-೬-೧೯೮೯ನೆಯ ಶನಿವಾರ, ಭಾನುವಾರಗಳಂದು ಶ್ರೀ ತೋಂಟದಾರ್ಯ ಸಿದ್ಧಲಿಂಗೇಶ್ವರ ಕಲ್ಯಾಣ ಮಂಟಪದಲ್ಲಿ ಅಕಾದೆಮಿಯ ಮೂರನೆಯ ವಾರ್ಷಿಕ ಸಮ್ಮೇಳನವು ನಡೆಯಿತು.

೧೦-೬-೮೯ನೆಯ ಶನಿವಾರ ಬೆಳಿಗ್ಗೆ ೯-೩೦ಕ್ಕೆ ಸಮ್ಮೇಳನದ ಉದ್ಘಾಟನೆಯನ್ನು ಗದುಗಿನ ಶ್ರೀ ಮ.ನಿ.ಜ. ಶ್ರೀ ತೋಂಟದಾರ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ನೆರವೇರಿಸಿದರು.

ಅಕಾದೆಮಿಯ ತೃತೀಯ ವಾರ್ಷಿಕ ಸಂಚಿಕೆ 'ಇತಿಹಾಸ ದರ್ಶನ'ವನ್ನು ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಸದಾಶಿವ ಎಸ್. ಒಡೆಯರ್ ಅವರು ಬಿಡುಗಡೆ ಮಾಡಿದರು.

ಸಮ್ಮೇಳನದ ಅಧ್ಯಕ್ಷರಾದ ಡಾ॥ ಶ್ರೀನಿವಾಸ ರಿತ್ತಿ ಅವರು ಅಧ್ಯಕ್ಷ ಭಾಷಣ ಮಾಡಿದರು. ಅಕಾದೆಮಿಯ ಉಪಾಧ್ಯಕ್ಷ ಕೆ. ಅಭಿಶಂಕರ್ ಅಕಾದೆಮಿಯ ಪರವಾಗಿ ಮಾತನಾಡಿದರು. ಮಹಾಸ್ವಾಮಿಗಳು ಸಮ್ಮೇಳನಾಧ್ಯಕ್ಷರಿಗೆ ಶಾಲು ಹೊದಿಸಿ ಸನ್ಮಾನಿಸಿದರು.

ಕಾರ್ಯಕ್ರಮದ ಆರಂಭಕ್ಕೆ ಶ್ರೀಮತಿ ಪಾರ್ವತಿಬಾಯಿ ಮಾಳಿಕೊಪ್ಪಮಠ ಅವರಿಂದ ಪ್ರಾರ್ಥನೆ, ಡಾ॥ ಅ. ಸುಂದರ ಅವರಿಂದ ಸ್ವಾಗತ ಹಾಗೂ ಅತಿಥಿ ಪರಿಚಯ, ಡಾ॥ ಸೂರ್ಯನಾಥ ಕಾಮತ್ ಅವರಿಂದ ಅಕಾದೆಮಿಯ ಉದ್ದೇಶ ನಿರೂಪಣೆ, ಎಸ್.ವಿ. ಗದಗ್ ಅವರಿಂದ ಮಾಲಾರ್ಪಣೆ, ಅಂತ್ಯದಲ್ಲಿ ಎಂ.ಜಿ. ನಾಗರಾಜ್ ಅವರಿಂದ ವಂದನಾರ್ಪಣೆಗಳು ನಡೆದವು. ಕಾರ್ಯಕ್ರಮದ ನಿರ್ವಹಣೆಯನ್ನು ಅನ್ನದಾನಿ ಹಿರೇಮಠ ಅವರು ಮಾಡಿದರು.

ಅದೇ ದಿನ (೧೧-೬-೮೯) ೧೧-೧೫ ರಿಂದ ಪ್ರೊ॥ ಮಾಧವ ನಾ. ಕಟ್ಟಿ ಅವರ ಅಧ್ಯಕ್ಷತೆಯಲ್ಲಿ ನಡೆದ ಮೊದಲ ಗೋಷ್ಠಿಯಲ್ಲಿ ಆರು ಜನ ವಿದ್ವಾಂಸರು ತಮ್ಮ ಪ್ರಬಂಧಗಳನ್ನು ಮಂಡಿಸಿದರು.

ಮಧ್ಯಾಹ್ನ ೨-೩೦ ರಿಂದ ಡಾ॥ ಅ. ಸುಂದರ ಅವರ ಅಧ್ಯಕ್ಷತೆಯಲ್ಲಿ ನಡೆದ ಎರಡನೇ ಗೋಷ್ಠಿಯಲ್ಲಿ ಆರು ಜನ ವಿದ್ವಾಂಸರೂ ಸಂಜೆ ೪-೩೦ ರಿಂದ ಕೆ. ಅಭಿಶಂಕರ್ ಅವರ ಅಧ್ಯಕ್ಷತೆಯಲ್ಲಿ ನಡೆದ ಮೂರನೇ ಗೋಷ್ಠಿಯಲ್ಲಿ ಎಂಟು ಜನ ವಿದ್ವಾಂಸರೂ ತಮ್ಮ ಪ್ರಬಂಧಗಳನ್ನು ಮಂಡಿಸಿದರು.

ಅದೇ ಸಂಜೆ ೬ ಗಂಟೆಗೆ ಅಕಾದೆಮಿಯ ಸರ್ವಸದಸ್ಯರ ಸಭೆಯು ಅಕಾದೆಮಿಯ ಉಪಾಧ್ಯಕ್ಷ ಕೆ. ಅಭಿಶಂಕರ್ ಅವರ ಅಧ್ಯಕ್ಷತೆಯಲ್ಲಿ ನಡೆದು ಮಂಡಿತ ವರದಿ, ಲೆಕ್ಕಪತ್ರಗಳು ಹಾಗೂ ಬಜೆಟ್‌ಗಳು ಸರ್ವಾನುಮತದಿಂದ ಒಪ್ಪಿತವಾದುವು. ಮಂಡಿಸಿದ ನಿರ್ಣಯಗಳೂ ಅಂಗೀಕೃತವಾದವು.

ದಿನಾಂಕ ೧೧-೬-೮೯ ರಂದು ಬೆಳಗ್ಗೆ ೯ ಗಂಟೆಗೆ ಡಾ॥ ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ ಆರಂಭವಾದ ನಾಲ್ಕನೆಯ ಗೋಷ್ಠಿಯಲ್ಲಿ ಎಂಟು ಪ್ರಬಂಧಗಳೂ ಅದೇ ಬೆಳಗ್ಗೆ ೧೧-೧೫ ರಿಂದ ಡಾ॥ ಎಂ. ಚಿದಾನಂದಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆದ ಐದನೇ ಗೋಷ್ಠಿಯಲ್ಲಿ ಎಂಟು ಪ್ರಬಂಧಗಳೂ ಮಧ್ಯಾಹ್ನ ೨ ಗಂಟೆಯಿಂದ ಕ.ವೆಂ. ರಾಜಗೋಪಾಲ್ ಅವರ ಅಧ್ಯಕ್ಷತೆಯಲ್ಲಿ ನಡೆದ ಆರನೇ ಗೋಷ್ಠಿಯಲ್ಲಿ ಎಂಟು ಪ್ರಬಂಧಗಳೂ ಮಂಡಿಸಲ್ಪಟ್ಟವು.

ಸಂಜೆ ೪ ಗಂಟೆಗೆ ಡಾ॥ ಎಂ.ಎಂ. ಕಲಬುರ್ಗಿ ಅವರ ಅಧ್ಯಕ್ಷತೆಯಲ್ಲಿ ನಡೆದ 'ಗದಗ ಪ್ರದೇಶ ; ಸಾಂಸ್ಕೃತಿಕ ಅಧ್ಯಯನ' ಎಂಬ ವಿಶೇಷ ವಿಚಾರ ಗೋಷ್ಠಿಯಲ್ಲಿ ಡಾ॥ ಲೀಲಾ ಶಾಂತಕುಮಾರಿ ಅವರು 'ಗದಗ_ಲಕ್ಕುಂಡಿ ಪ್ರದೇಶದ ಶಾಸನಗಳು', ಮಾಧವ ನಾ. ಕಟ್ಟಿ ಅವರು 'ಗದುಗಿನ ಶಾಸನಗಳು' ಹಾಗೂ ಡಾ॥ ಅ. ಸುಂದರ ಅವರು 'ಗದಗ ಪ್ರದೇಶದ ಪ್ರಾಚೀನ ದೇವಾಲಯಗಳ ಕೆಲವು ವಿಶಿಷ್ಟ ವಾಸ್ತುಶಿಲ್ಪ ಲಕ್ಷಣಗಳು' ಕುರಿತು ಮಾತನಾಡಿದರು.

ಸಮ್ಮೇಳನಾಧ್ಯಕ್ಷ ಡಾ॥ ಶ್ರೀನಿವಾಸ ರಿತ್ತಿ ಅವರು ಸಮಾರೋಪ ಭಾಷಣ ಮಾಡಿದರು. ಸಮ್ಮೇಳನದ ಸಮಯದಲ್ಲಿ ಶ್ರೀಮತಿ ಪಾರ್ವತಿಬಾಯಿ ಮಾಳಿಕೊಪ್ಪಮಠ ಅವರಿಂದ ಸುಶ್ರಾವ್ಯ ಸಂಗೀತ ಕಾರ್ಯಕ್ರಮ ನಡೆಯಿತು. ಸಮ್ಮೇಳನಾಂತ್ಯದಲ್ಲಿ ಶ್ರೀ ವೀರಶೈವ ಅಧ್ಯಯನ ಸಂಸ್ಥೆ(ತೋಂಟದಾರ್ಯಮಠ)ಯ ಅಧ್ಯಕ್ಷ ಸಂಗಣ್ಣ ವೀರಪ್ಪ ಗದಗ, ಕಾರ್ಯದರ್ಶಿ ಕೆ.ಎನ್. ಚೆಟ್ಟಿ, ಜಿ. ವಿಶ್ವನಾಥ ಬುಳ್ಳ, ಅಶೋಕ ಅಕ್ಕಿ, ಸಂಕಣ್ಣನವರ್, ಕಾಶಿಯಪ್ಪ ಅವರುಗಳಿಗೆ ಸಮ್ಮೇಳನದ ಯಶಸ್ಸಿಗೆ ಸಲ್ಲಿಸಿದ ಸೇವೆಗಾಗಿ ಮಾಲಾರ್ಪಣೆ ಮಾಡಿ ಗೌರವಿಸಲಾಯಿತು. ಹೀಗೆಯೇ ವೀರೇಂದ್ರಸಿಂಹ,

ಕಡಕೋಳ್, ಹೆಬ್ಬಾಳ್ ಅವರಿಗೂ ಪತ್ರಿಕಾ ಪ್ರಚಾರ ನೀಡಿದ ನವೋದಯ, ನಾಗರಿಕ, ಸಂಯುಕ್ತ ಕರ್ನಾಟಕ ಸಂಪಾದಕರು ಹಾಗೂ ಪತ್ರಿಕಾ ಪ್ರತಿನಿಧಿಗಳಿಗೂ ಗೌರವ ಸಲ್ಲಿಸಲಾಯಿತು.

ಸಮ್ಮೇಳನಕ್ಕೆ ಕರ್ನಾಟಕದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಜಪಾನೀ ವಿದ್ವಾಂಸರನ್ನೂ ಒಳಗೊಂಡಂತೆ ೪೦ ಮಂದಿ ಹಿರಿಯ ಹಾಗೂ ಕಿರಿಯ ವಿದ್ವಾಂಸರು ಚರಿತ್ರೆ, ಶಾಸನ, ಪ್ರಾಚ್ಯ ಅವಶೇಷಗಳು, ಶಿಲ್ಪ, ಗ್ರಾಮಗಳ ಅಸ್ತಿತ್ವ, ರಾಜಕೀಯ ಸಂಘಟನೆ, ದೇವಾಲಯ ಕುರಿತಂತೆ ಪ್ರಬಂಧಗಳನ್ನು ಮಂಡಿಸಿದರು. ವಿಶೇಷೋಪನ್ಯಾಸ ಮಾಲೆಯಲ್ಲಿ ಮೂರು ಜನ ವಿದ್ವಾಂಸರು ಪ್ರಬಂಧ ಮಂಡಿಸಿದರು.

**ಇತಿಹಾಸ ಮತ್ತು ಸಾಹಿತ್ಯ ವಿಚಾರ ಸಂಕಿರಣ :** ದಿನಾಂಕ ೨-೨-೧೯೯೦ನೆಯ ಶುಕ್ರವಾರದಂದು, ಅಕಾದೆಮಿಯು ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಹಾಗು ವಿಧಾತ ವಿದ್ಯಾ ಸಂಸ್ಥೆ, ಆನೇಕಲ್ಲು ಇವರ ಸಹಕಾರದೊಡನೆ, ಆನೇಕಲ್ಲು ತಾಲ್ಲೂಕು ಇತಿಹಾಸ ಮತ್ತು ಸಾಹಿತ್ಯ ವಿಚಾರ ಸಂಕಿರಣವನ್ನು ಆನೇಕಲ್‌ನಲ್ಲಿ ಹಮ್ಮಿಕೊಳ್ಳಲಾಗಿತ್ತು. ಡಾ॥ ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ ಪಿ.ವಿ. ಕೃಷ್ಣಮೂರ್ತಿ, ದೇವರ ಕೊಂಡಾರೆಡ್ಡಿ, ಲಕ್ಷ್ಮಣ್ ತೆಲಗಾವಿ, ಅ. ಲ. ನರಸಿಂಹನ್, ಎಸ್.ಎ. ಜಗನ್ನಾಥ್ ಅವರುಗಳು ಕ್ರಮವಾಗಿ ಆ ತಾಲ್ಲೂಕಿನ ಇತಿಹಾಸ, ಶಾಸನ, ಸಾಹಿತ್ಯ, ಶಿಲ್ಪಕಲೆ ಹಾಗೂ ಪ್ರೇಕ್ಷಣೀಯ ಸ್ಥಳಗಳ ಬಗೆಗೆ ತಮ್ಮ ಪ್ರಬಂಧಗಳನ್ನು ಮಂಡಿಸಿದರು.

**ಇತಿಹಾಸ ಪರೀಕ್ಷೆ :** ಪದವಿಪೂರ್ವ ತರಗತಿಯ ವಿದ್ಯಾರ್ಥಿಗಳಿಗೆ ೧೯೯೦ನೇ ಫೆಬ್ರವರಿ ತಿಂಗಳಿನಲ್ಲಿ ಬೆಂಗಳೂರು, ಮೈಸೂರು, ಧಾರವಾಡ ಮತ್ತು ಗುಲ್ಬರ್ಗ ಕೇಂದ್ರಗಳಲ್ಲಿ ಇತಿಹಾಸ ಪರೀಕ್ಷೆಯನ್ನು ಯಶಸ್ವಿಯಾಗಿ ನಡೆಸಲಾಯಿತು. ಒಟ್ಟು ೪,೩೪೮ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದರು. (ಬೆಂಗಳೂರು : ೨೩೦೫, ಮೈಸೂರು : ೮೦೭, ಧಾರವಾಡ : ೧೧೪೮, ಗುಲ್ಬರ್ಗ : ೧೮೮). ಒಟ್ಟು ೬ ಬಹುಮಾನಗಳನ್ನು ನೀಡಲಾಯಿತು. ಈ ಸಾಲಿನಲ್ಲಿ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನ ಇತಿಹಾಸ ಉಪನ್ಯಾಸಕ ಜಿ. ರಾಧಾಕೃಷ್ಣ ಅವರು ಪರೀಕ್ಷೆಯ ಸಂಚಾಲಕ ರಾಗಿದ್ದರು. ಪ್ರಾಂಶುಪಾಲ ಜಿ.ಎಸ್. ವೆಂಕಟರಾಜು, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಕೆ.ಸಿ. ಪುಟ್ಟನರಸಯ್ಯ ಅವರುಗಳು ಸಹಕಾರ ನೀಡಿದರು.

**ಕಾರ್ಯಕಾರಿ ಸಮಿತಿ ಸಭೆಗಳು:** ೧೯೮೯-೯೦ನೇ ಸಾಲಿನಲ್ಲಿ ೧೯೯೦ ರ ಮಾರ್ಚ್ ೩೧ರವರೆಗೆ ಒಟ್ಟು ಐದುಬಾರಿ ಕಾರ್ಯಕಾರಿ ಸಮಿತಿ ಸಭೆಗಳು ಬೆಂಗಳೂರಿನಲ್ಲಿ ಸೇರಿದ್ದು, ಅಕಾದೆಮಿಯ ವಿವಿಧ ಕಾರ್ಯಕ್ರಮಗಳನ್ನು ಕೈಗೊಳ್ಳಲು ನೆರವಾಗಿವೆ.

**ಸದಸ್ಯರ ಸಂಖ್ಯೆ :** ಈ ವಾರ್ಷಿಕ ಮಹಾಸಭೆಯ ಹೊತ್ತಿಗೆ ಸದಸ್ಯತ್ವದ ಸಂಖ್ಯಾವಿವರ ಈ ಮುಂದಿನಂತಿದೆ: ಆಜೀವ ಸದಸ್ಯರು ೧೮೬, ಸಾಮಾನ್ಯ ಸದಸ್ಯರು ೨೨೨—ಒಟ್ಟು ೪೦೮ ; (೧೯೮೬-೮೭=೧೩೦, ೧೯೮೭-೮೮=೧೧+೧೩೦, ೧೯೮೮-೮೯=೬೭+೧೪೨, ೧೯೮೯-೯೦=೧೮೬+೨೨೨).

**ಕೃತಜ್ಞತೆ :** ೧೯೮೯-೯೦ನೇ ಸಾಲಿನಲ್ಲಿ ಅಕಾದೆಮಿಯ ಕಾರ್ಯಕ್ರಮಗಳಿಗೆ ಸೂಕ್ತ ಸಹಕಾರ ನೀಡಿದ ಮಿಥಿಕ್ ಸೊಸೈಟಿ, ಬೆಂಗಳೂರು; ಬಸವ ಸಮಿತಿ, ಬೆಂಗಳೂರು ; ಬೆಂಗಳೂರು ನಗರ ಜಿಲ್ಲಾ ಹಾಗೂ ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷರಾದ ಜಿ.ವಿ. ಶಿವಸ್ವಾಮಿ ಮತ್ತು ಎಲ್ಲೇಗೌಡ ಬೆಸಗರಹಳ್ಳಿ ; ಟಿ.ಎನ್. ಕುಮಾರಸ್ವಾಮಿ, ಕಾರ್ಯದರ್ಶಿ, ವಿಧಾತ ವಿದ್ಯಾಸಂಸ್ಥೆ, ಆನೇಕಲ್ ; ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎಮ್. ಷಡಕ್ಷರಸ್ವಾಮಿ ಮತ್ತು ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು ಪ್ರಾಂಶುಪಾಲ ಆರ್. ರಾಚಪ್ಪ ; ಧಾರವಾಡದ ಆರ್.ಎಲ್.ಎಸ್. ಸಂಯುಕ್ತ ಪದವಿಪೂರ್ವ ಕಾಲೇಜು

ಪ್ರಾಂಶುಪಾಲ ಚನ್ನಪ್ಪ ಗೌಡರ್; ಹುರಿಕಡ್ಲಿ ಅಜ್ಜ ಕಾನೂನು ಕಾಲೇಜಿನ ಪ್ರಾಂಶುಪಾಲರು; ಶ್ರೀ ಮೃತ್ಯುಂಜಯ ಪದವಿ ಕಾಲೇಜಿನ ಪ್ರಾಂಶುಪಾಲ ಸಿ.ವಿ. ಮಠದ್; ಗುಲ್ಬರ್ಗ ನೂತನ ವಿದ್ಯಾಸಂಸ್ಥೆಯ ಅಧ್ಯಕ್ಷರು ಮತ್ತು ಪ್ರಾಂಶುಪಾಲರಾದ ಪ್ರೊ|| ವಸಂತ ಕುಷ್ಟಗಿ; ಮೈಸೂರು ವಿಶ್ವವಿದ್ಯಾನಿಲಯ ಪ್ರಾಚೀನ ಇತಿಹಾಸ ವಿಭಾಗದ ರೀಡರ್ ಡಾ|| ಎಂ.ಎಸ್. ಕೃಷ್ಣಮೂರ್ತಿ ; ಮೈಸೂರಿನ ಬನುಮಯ್ಯ ಕಾಲೇಜಿನ ಪ್ರಾಂಶುಪಾಲರು ಮತ್ತು ದಳವಾಯಿ ಹೈಸ್ಕೂಲಿನ ಮುಖ್ಯೋಪಾಧ್ಯಾಯರು ಮೊದಲಾದ ಸಂಸ್ಥೆಗಳಿಗೆ ಮಹನೀಯರುಗಳಿಗೆ ಅಕಾದೆಮಿಯು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಗದಗ ಸಮ್ಮೇಳನದ ಯಶಸ್ವಿಗೆ ನೆರವಾದ ಶ್ರೀ ಮ.ನಿ.ಜ. ಶ್ರೀ ತೋಂಟದಾರ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ, ಅಕಾದೆಮಿಯ ಸದಸ್ಯರು ಹಾಗೂ ಪದಾಧಿಕಾರಿಗಳಿಗೆ, ವಿಶೇಷವಾಗಿ ಅ.ಲ. ನರಸಿಂಹನ್, ದೇವರಕೊಂಡಾರೆಡ್ಡಿ, ಕೆ.ಎಲ್. ರಾಜಶೇಖರ್, ಆರ್. ಮಧ್ವರಾಜ್, ಟಿ.ಜಿ. ನರಸಿಂಹಮೂರ್ತಿ, ಎಸ್.ಎ. ಜಗನ್ನಾಥ್, ಎಚ್.ಎಸ್ ಗೋಪಾಲರಾವ್, ಡಾ|| ಎ.ವಿ. ನರಸಿಂಹಮೂರ್ತಿ ಅವರುಗಳಿಗೆ ಅಕಾದೆಮಿಯು ಕೃತಜ್ಞತೆ ಅರ್ಪಿಸುತ್ತದೆ.